# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 353 |
| ಸದಸ್ಯರ ಹೆಸರು | : | ಶ್ರೀ ಕೆ.ಹರೀಶ್ ಕುಮಾರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 15-09-2021. |
| ಉತ್ತರಿಸುವ ಸಚಿವರು | : | ಮಾನ್ಯ ಲೋಕೋಪಯೋಗಿ ಸಚಿವರು |

| .ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಬಿ.ಸಿ.ರೋಡ್-ಅಡ್ಡಹೊಳೆ ರಾಷ್ಟ್ರೀಯ ಹೆದ್ದಾರಿ (ಎನ್.ಹೆಚ್-75) ಕಾಮಗಾರಿಯು ಕಳೆದ 2 ವರ್ಷಗಳಿಂದ ಯಾವುದೇ ಪ್ರಗತಿ ಕಾಣದೆ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಬಂದಿದೆ.<br>ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಬಿ.ಸಿ.ರೋಡ್-ಅಡ್ಡಹೊಳೆ ರಾಷ್ಟ್ರೀಯ ಹೆದ್ದಾರಿಯು (ಎನ್.ಹೆಚ್-75) ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ಇವರ ಸುಪರ್ದಿಯಲ್ಲಿರುತ್ತದೆ.<br>ಬಿ.ಸಿ.ರೋಡ್ ಅಡ್ಡಹೊಳೆ ಕಾಮಗಾರಿಯ ಕುರಿತು ಈ ಕೆಳಕಂಡಂತೆ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ವರದಿಸಿರುತ್ತಾರೆ: |
| ಆ) | ಬಂದಿದ್ದಲ್ಲಿ, ಸದರಿ ರಸ್ತೆ ಕಾಮಗಾರಿಯನ್ನು ತ್ವರಿತವಾಗಿ ಮುಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; (ಸದರಿ ಕಾಮಗಾರಿಯ ಗುತ್ತಿಗೆದಾರರ ವಿವರ, ಕಾಮಗಾರಿಯ ಅನುದಾನದ ಒಟ್ಟು ವಿವರ ನೀಡುವುದು) | ಬಿ.ಸಿ.ರೋಡ್ ಅಡ್ಡಹೊಳೆ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು M/s Larsen & Turbo Ltd ಇವರಿಗೆ ದಿನಾಂಕ:11.04.2016 ರಂದು ಗುತ್ತಿಗೆ ವಹಿಸಲಾಗಿರುತ್ತದೆ. ಆದರೆ, ಗುತ್ತಿಗೆದಾರರ ಆರ್ಥಿಕ ಮುಗ್ಗಟ್ಟಿನಿಂದ ಕಾಮಗಾರಿ ಕುಂಠಿತವಾಗಿದ್ದು, ಕಾಮಗಾರಿಯನ್ನು ಯಥಾಸ್ಥಿತಿಯಲ್ಲಿ ಮುಕ್ತಾಯಗೊಳಿಸಲಾಗಿದೆ. ಪ್ರಸ್ತುತ, ಸದರಿ ಕಾಮಗಾರಿಯನ್ನು ಇ.ಪಿ.ಸಿ. ಯೋಜನೆಯಡಿ ಕೈಗೊಳ್ಳಲು 2 ಪ್ಯಾಕೇಜ್‌ಗಳನ್ನಾಗಿ ವಿಂಗಡಿಸಿದ್ದು, ಹೊಸದಾಗಿ ಗುತ್ತಿಗೆ ಕರೆಯಲಾಗಿದೆ. ಪ್ಯಾಕೇಜ್‌ಗಳ ವಿವರಗಳು ಈ ಕೆಳಕಂಡಂತಿವೆ. |
| ಇ) | ಇದುವರೆಗೆ ಬಿಡುಗಡೆಯಾದ ಅನುದಾನ ಎಷ್ಟು; (ಕಾಮಗಾರಿಯ ಪ್ರಗತಿ ಕುರಿತಂತೆ ಅಂಕಿ-ಅಂಶಗಳೊಂದಿಗೆ ಸಂಪೂರ್ಣ ವಿವರ ನೀಡುವುದು) | **ಪ್ಯಾಕೇಜ್ 01 : ಪೆರಿಯಶಾಂತಿಯಿಂದ ಅಡ್ಡಹೊಳೆವರೆಗೆ**<br>ರಾಷ್ಟ್ರೀಯ ಹೆದ್ದಾರಿ-75 ರ (ಹಳೆ ರಾ.ಹೆ.-48) ಕಿ.ಮೀ. 255.703 ರಿಂದ 270.270 ಕಿ.ಮೀ.ವರೆಗೆ ಅಡ್ಡಹೊಳೆ (ಗುಂಡ್ಯ ಹತ್ತಿರ) ಯಿಂದ ಬಂಟ್ವಾಳ ಕ್ರಾಸ್ ವಿಭಾಗದ ರಸ್ತೆಯನ್ನು ಚತುಷ್ಪಥ ರಸ್ತೆಯನ್ನಾಗಿ ಅಭಿವೃದ್ಧಿ ಪಡಿಸುವ ಕಾಮಗಾರಿ.<br>ಗುತ್ತಿಗೆದಾರರು : ಮೆ: ಎಸ್.ಎಂ. ಔತಾಡೆ ಪ್ರೈ.ಲಿ.<br>ಯೋಜನೆಯ ಮೊತ್ತ : ರೂ.317.54 ಕೋಟಿ (ಗುತ್ತಿಗೆ ಮೊತ್ತ)<br>ಅನುದಾನ ಬಿಡುಗಡೆ: ಇಲ್ಲ (ನೇಮಕಾತಿ ದಿನಾಂಕ ನಿಗಧಿಪಡಿಸಬೇಕಾಗಿರುತ್ತದೆ.)<br><br>**ಪ್ಯಾಕೇಜ್ 02 : ಅಡ್ಡಹೊಳೆ ಯಿಂದ ಬಂಟ್ವಾಳದವರೆಗೆ**<br>ರಾಷ್ಟ್ರೀಯ ಹೆದ್ದಾರಿ-75ರ (ಹಳೆ ನಂ.48) ಕಿ.ಮೀ.270.270 ರಿಂದ ಕಿ.ಮೀ.318.55 ರವರೆಗೆ ಅಡ್ಡಹೊಳೆ (ಗುಂಡ್ಯ ಹತ್ತಿರ) ಯಿಂದ ಬಂಟ್ವಾಳ ಕ್ರಾಸ್‌ವರೆಗೆ ಚತುಷ್ಪಥ ರಸ್ತೆ ಕಾಮಗಾರಿ ಹಾಗೂ ಕಿ.ಮೀ.318.55ರಲ್ಲಿ ಕಲ್ಲಡ್ಕ ನಗರಕ್ಕೆ ಮೇಲ್ಸೇತುವೆ, ಕಿ.ಮೀ.311.57 ರಿಂದ ಕಿ.ಮೀ.313.67 ವರೆಗೆ ಅಪ್ರೋಚ್ ರಸ್ತೆ ಒಳಗೊಂಡಂತೆ. |

| | | |
|---|---|---|
| | | ಗುತ್ತಿಗೆದಾರರು : ಮೆ: ಕೆ.ಎನ್.ಆರ್. ಕನ್‌ಸ್ಟ್ರಕ್ಷನ್ಸ್ ಲಿಮಿಟೆಡ್<br>ಯೋಜನೆಯ ಮೊತ್ತ: ರೂ.1110.00 ಕೋಟಿ (ಗುತ್ತಿಗೆ ಮೊತ್ತ)<br>ಅನುದಾನ ಬಿಡುಗಡೆ: ಇಲ್ಲ (ನೇಮಕಾತಿ ದಿನಾಂಕ ನಿಗಧಿಪಡಿಸಬೇಕಾಗಿರುತ್ತದೆ) |
| ಈ) | ಶಿರಾಡಿಘಾಟ್ ಪ್ರದೇಶದಲ್ಲಿ ಎಷ್ಟು ಕಡೆ ಭೂಕುಸಿತದಿಂದಾಗಿ ರಸ್ತೆಗೆ ಅಡಚಣೆ ಆಗಿರುತ್ತದೆ; ದುರಸ್ಥಿಗೆ ಕೈಗೊಂಡ ಕ್ರಮಗಳೇನು? | ರಾಷ್ಟ್ರೀಯ ಹೆದ್ದಾರಿ–75 (ಶಿರಾಡಿಘಾಟ್)ರ ಬಿ.ಸಿ ರೋಡ್–ವೆಲ್ಲೂರ್ ರಸ್ತೆಯ ಕಿ.ಮೀ.59.100 (ಕಿ.ಮೀ.263.00) (ಅಡ್ಡಹೊಳೆ) ರಿಂದ ಕಿ.ಮೀ.85.100 (ಕಿ.ಮೀ.237.00) (ಮಾರನಹಳ್ಳಿ) ರವರೆವಿಗೆ ಒಟ್ಟು 26 ಕಿ.ಮೀ. ರಸ್ತೆಯ ಭಾಗವು ರಾಷ್ಟ್ರೀಯ ಹೆದ್ದಾರಿ ವಲಯ ವ್ಯಾಪ್ತಿಯಲ್ಲಿ ಬರಲಿದ್ದು, ಸದರಿ ರಸ್ತೆಯಲ್ಲಿ ವರ್ಷವಾರು ಭೂಕುಸಿತದಿಂದಾಗಿ ರಸ್ತೆಗೆ ಅಡಚಣೆ ಉಂಟಾಗಿದ್ದು, ಕೈಗೊಂಡಿರುವ ದುರಸ್ತಿ ಕಾಮಗಾರಿಗಳ ವಿವರಗಳು ಈ ಕೆಳಕಂಡಂತಿವೆ:<br><br>2021–22ನೇ ಸಾಲಿನಲ್ಲಿ 12 ಕಡೆಗಳಲ್ಲಿ ಸಣ್ಣ ಪ್ರಮಾಣದ ಭೂಕುಸಿತಗಳು ಉಂಟಾಗಿದ್ದು, ತಕ್ಷಣವೇ ತೆರವುಗೊಳಿಸಿ ಸುಗಮ ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲಾಗಿರುತ್ತದೆ.<br><br>2018–19 ರಲ್ಲಿ ರಾ.ಹೆ–75ರಲ್ಲಿ 26 ಕಡೆ ಕಣಿವೆ ಭಾಗದಲ್ಲಿ ಭೂಕುಸಿತ ಉಂಟಾಗಿದ್ದು, ಸದರಿ ಭೂಕುಸಿತ ಭಾಗಗಳ ಶಾಶ್ವತ ದುರಸ್ತಿಗಾಗಿ (Permanent Restoration) ರೂ.36.52 ಕೋಟಿಗಳ ಮೊತ್ತಕ್ಕೆ ಅಂದಾಜು ಪತ್ರಿಕೆಯು ಕೇಂದ್ರ ಭೂಸಾರಿಗೆ ಮಂತ್ರಾಲಯ, ನವದೆಹಲಿ ಇವರಿಂದ ಅನುಮೋದನೆ ದೊರೆತಿದ್ದು, ಸದರಿ ಕಾಮಗಾರಿಯ 4ನೇ ಟೆಂಡರ್ ಕರೆಯಲಾಗುತ್ತಿದೆ. |

ಕಡತ ಸಂಖ್ಯೆ: ಲೋಇ 209 ಸಿಎನ್‌ಹೆಚ್ 2021 (ಇ)

(ಸಿ.ಸಿ.ಪಾಟೀಲ)
ಲೋಕೋಪಯೋಗಿ ಸಚಿವರು